


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 30-03-2021 ಪ್ರಶ್ನೆ ಸಂಖ್ಯೆ : 2095(2427)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ನಸೀರ್ ಅಹ್ಮದ್(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 30-03-2021

ಉತ್ತರಿಸುವ ಸಚಿವರು: ಮಾನ್ಯ ಸಹಕಾರ ಸಚಿವರು

ವಿಷಯ : ಕರ್ನಾಟಕ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಂಕ್‌ನ ಬಂಡವಾಳ ಹಾಗೂ ಸಿಬ್ಬಂದಿಗಳ ಬಗ್ಗೆ

(ಅ) ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಂಕಿನ ಬಂಡವಾಳ ಎಷ್ಟು; ಸದರಿ ಬ್ಯಾಂಕಿನ ಯಾವ ಯಾವ ಲೆಕ್ಕ ಶೀರ್ಷಿಕೆಯಡಿ ಎಷ್ಟೆಷ್ಟು ಮೊತ್ತವಿದೆ; (ಲೆಕ್ಕ ಶೀರ್ಷಿಕೆವಾರು ಮಾಹಿತಿ ಒದಗಿಸುವುದು)

(ಆ) ಸದರಿ ಬ್ಯಾಂಕು ಹೊಂದಿರುವ ಸ್ವಂತ ಆಸ್ತಿ ಎಷ್ಟು; (ಜಿಲ್ಲಾವಾರು ಮಾಹಿತಿ ಒದಗಿಸುವುದು)

(ಇ) ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಂಕಿನ ಮೈಸೂರು ಶಾಖಾ ಕಛೇರಿಯ ಕಟ್ಟಡವನ್ನು ಲೋಕೋಪಯೋಗಿ ಇಲಾಖೆ ಹಾಗೂ ಮೈಸೂರು ಮಹಾನಗರ ಪಾಲಿಕೆಯ ಅನುಮತಿ ಪಡೆಯದೇ ಕಾನೂನು ಬಾಹಿರವಾಗಿ ಒಡೆದು ಹಾಕಿ ನಿವೇಶನದ ಸಾಮಗ್ರಿಗಳನ್ನು ವಿಲೇವಾರಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ರೀತಿ ಕಾನೂನು ಬಾಹಿರವಾಗಿ ಕಛೇರಿ ಕಟ್ಟಡವನ್ನು ಒಡೆದು ಹಾಕಲು ತೀರ್ಮಾನಿಸಿದವರು ಯಾರು; ಇವರ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು;

(ಈ) ರಾಜ್ಯಾದ್ಯಾಂತ ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ದಿ ಬ್ಯಾಂಕಿನ ಶಾಖೆಗಳ ಸಂಖ್ಯೆ ಎಷ್ಟು; ಕೇಂದ್ರ ಕಛೇರಿ ಹಾಗೂ ಶಾಖಾ ಕಛೇರಿಗಳು ಸೇರಿದಂತೆ ಸದರಿ ಬ್ಯಾಂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; ಇವರುಗಳಲ್ಲಿ ಎರವಲು ಸೇವೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ಸಂಖ್ಯೆ ಎಷ್ಟು; (ಶಾಖಾವಾರು ಮಾಹಿತಿ ಒದಗಿಸುವುದು)

(ಉ) ಕೆಲವು ಶಾಖೆ ಕಛೇರಿಯಲ್ಲಿ ಅಗತ್ಯಕ್ಕಿಂತ ಹೆಚ್ಚು ಸಿಬ್ಬಂದಿಗಳಿರುವುದು ಹಾಗೂ ಕೆಲವು ಶಾಖಾ ಕಛೇರಿಗಳಲ್ಲಿ ಸಿಬ್ಬಂದಿಗಳ ಕೊರತೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹೌದಾದಲ್ಲಿ, ಈ ಸಂಬಂಧ ಸರ್ಕಾರ ಕೈಗೊಳ್ಳುವ ಕ್ರಮವೇನು;

(ಊ) ಯಾವ ಯಾವ ವಿಷಯಗಳ ಮೇಲೆ ಎಷ್ಟು ಅಧಿಕಾರಿ/ನೌಕರರುಗಳ ವಿರುದ್ಧ ವಿಚಾರಣೆ ನಡೆಸಲಾಗುತ್ತಿದೆ; ವಿಚಾರಣೆಗಳು ಯಾವ ಹಂತದಲ್ಲಿದೆ; ದೋಷಾರೋಪಣೆ ಹೊರಡಿಸಿರುವ/ದೋಷಿತ ಅಧಿಕಾರಿ/ನೌಕರರುಗಳ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; (ಶಾಖಾವಾರು ಮಾಹಿತಿ ಒದಗಿಸುವುದು)

(ಋ) ಕೇಂದ್ರ ಕಛೇರಿ ಸೇರಿದಂತೆ ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕಿನ ವಿವಿಧ ಶಾಖೆಗಳಿಗೆ ಮಂಜೂರಾದ ಹುದ್ದೆಗಳಲ್ಲಿ ಭರ್ತಿ ಮಾಡಿಕೊಳ್ಳದಿರುವ ಹುದ್ದೆಗಳ ಸಂಖ್ಯೆ ಎಷ್ಟು; ಭರ್ತಿ ಮಾಡಿಕೊಳ್ಳದಿರಲು ಕಾರಣವೇನು; ಯಾವ ಕಾಲಮಿತಿಯೊಳಗೆ ಭರ್ತಿ ಮಾಡಿಕೊಳ್ಳಲು ಕ್ರಮ ವಹಿಸಲಾಗುವುದು?